# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮೇ ೨೯, ೨೦೧೪ (ಜ್ಯೇಷ್ಠ ೮, ಶಕ ವರ್ಷ ೧೯೩೬)<br>Bangalore, Thursday, May 29, 2014 (Jyeishta 8, Shaka Varsha 1936) | ಸಂಚಿಕೆ ೨೨<br>Issue 22 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** ಹಾಸನ ಜಿಲ್ಲೆಯ ಮೀನುಗಾರಿಕೆ ಇಲಾಖೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ – ಲೋಕಾಯುಕ್ತ ತನಿಖೆ

**ಓದಲಾಗಿದೆ :**
1. ಆದೇಶ ಸಂಖ್ಯೆ: ಪಸಂಮೀ/75/ಮೀಇಸೇ/2010, ದಿನಾಂಕ: 20–05–2010.
2. ಅಪರ ನಿಬಂಧಕರು ವಿಚಾರಣೆಗಳು–5 (ಪ್ರಭಾರ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಎಂವೈಎಸ್–36/2010–ಅನಿವಿ–5, ದಿನಾಂಕ:30–07–2013.

**ಪ್ರಸ್ತಾವನೆ :**

ಹಾಸನ ಜಿಲ್ಲೆಯಲ್ಲಿ ಪ್ರಧಾನ ಮಂತ್ರಿಗಳ "ರೈತರ ವಿಶೇಷ ಪ್ಯಾಕೇಜ್" (ವಿದರ್ಭ ಪ್ಯಾಕೇಜ್) ಯೋಜನೆ ಅಡಿಯಲ್ಲಿ ಮೀನು ಕೊಳ ನಿರ್ಮಾಣದ ಸಹಾಯಧನ ನೀಡುವಲ್ಲಿ ಮೀನುಗಾರಿಕೆ ಇಲಾಖೆ ಅಧಿಕಾರಿಗಳಿಂದ ಅವ್ಯವಹಾರ ನಡೆದಿದೆ ಎಂದು ದಿನಪತ್ರಿಕೆಯಲ್ಲಿ ಬಂದ ಪ್ರಕಟಣೆ ಹಾಗೂ ಈ ಸಂಬಂಧ ಮೀನುಗಾರಿಕೆ ಉಪ ನಿರ್ದೇಶಕರು, ಮೈಸೂರುರವರು ನೀಡಿದ ತನಿಖಾ ವರದಿಯ ಆಧಾರದ ಮೇಲೆ ಹಾಸನ ಜಿಲ್ಲೆಯಲ್ಲಿ ಮೀನು ಕೊಳ ನಿರ್ಮಾಣಕ್ಕಾಗಿ ಸಹಾಯಧನ ನೀಡುವಲ್ಲಿ ಸರ್ಕಾರದ ನೀತಿ ನಿಯಮಗಳನ್ನು ಸರಿಯಾಗಿ ಪಾಲಿಸದೆ ಅವ್ಯವಹಾರ ನಡೆದಿರುವ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಪ್ರಕರಣ 7(2ಎ) ಅಡಿಯಲ್ಲಿ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:20–5–2010 ಆದೇಶದನ್ವಯ ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಪರ ನಿಬಂಧಕರು ವಿಚಾರಣೆಗಳು–5 (ಪ್ರಭಾರ) ಇವರ ಪತ್ರದಲ್ಲಿ, ದಿನಾಂಕ:20–5–2010ರ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತ ಕಾಯಿದೆ (2)(ಎ)ರನ್ವಯ ಕರ್ನಾಟಕ ಲೋಕಾಯುಕ್ತ ಸಂಸ್ಥೆಗೆ ವಹಿಸಲಾದ ಪ್ರಕರಣವನ್ನು, ಸಂಸ್ಥೆಯ ತನಿಖಾ ವಿಭಾಗದಿಂದ ತನಿಖೆಯನ್ನು ಕೈಗೊಳ್ಳಲಾಯಿತೆಂದು, ಕೂಲಂಕಷವಾದ ತನಿಖೆಯ ನಂತರ ತನಿಖಾಧಿಕಾರಿಗಳು ತಮ್ಮ ವರದಿಯನ್ನು ಸಲ್ಲಿಸಿ, ಸರ್ಕಾರದ ಆದೇಶದಲ್ಲಿ ಸೂಚಿಸಿರುವ ಆಪಾದನೆಗಳು ಸಾಬೀತಾಗಿರುವುದಿಲ್ಲವೆಂದು ತಿಳಿಸಿರುವುದರಿಂದ, ಮೇಲ್ಕಂಡ ಪ್ರಕರಣದ ತನಿಖೆಯನ್ನು ಮುಕ್ತಾಯಗೊಳಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಮಾನ್ಯ ಲೋಕಾಯುಕ್ತಕ್ಕೆ ವಹಿಸಿರುವ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ಹಾಗೂ ಪ್ರಕರಣದ ತನಿಖೆಯನ್ನು ಮುಕ್ತಾಯಗೊಳಿಸಲಾಗಿದೆ ಎಂದು ತಿಳಿಸಿರುವುದರಿಂದ, ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಪಸಂಮೀ 75 ಮೀಇಸೇ 2010, ಬೆಂಗಳೂರು ದಿನಾಂಕ:26–04–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆಪಾದಿತ ಅಧಿಕಾರಿಯಾದ ಶ್ರೀ ಪಿ. ನಾಗರಾಜು, ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ನಿವೃತ್ತ)ರವರು ಈ ಹಿಂದೆ ಹಾಸನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿನ ಪ್ರಕರಣಗಳಿಗೆ ಸಂಬಂಧಿಸಿದಂತೆ ಮಾನ್ಯ ಲೋಕಾಯುಕ್ತಕ್ಕೆ ವಿಚಾರಣೆ ನಡೆಸಲು ವಹಿಸಿರುವ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗಿಲ್ಲದೇ ಇರುವುದರಿಂದ, ಹಾಗೂ ತನಿಖೆಯನ್ನು ಮುಕ್ತಾಯಗೊಳಿಸಿರುವ ಹಿನ್ನೆಲೆಯಲ್ಲಿ, ಸದರಿಯವರ ಮೇಲೆ ಹೊರಿಸಲಾದ ಆರೋಪಗಳಿಂದ ಸರ್ಕಾರವು ಇವರನ್ನು ದೋಷಮುಕ್ತರೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಜಯಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ).

PR. 388

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ** : 2013–14ನೇ ಸಾಲಿನ **"ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ"** ನೀಡಲು ಆಯ್ಕೆ ಸಮಿತಿ ರಚಿಸುವ ಕುರಿತು.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರದ ವತಿಯಿಂದ **ವಿಶ್ವ ಪರಿಸರ ದಿನಾಚರಣೆ**ಯಂದು ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ವತಿಯಿಂದ ಪ್ರತಿ ವರ್ಷ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ವ್ಯಕ್ತಿ ಹಾಗೂ ಸಂಸ್ಥೆ (ಸರ್ಕಾರಿ/ಸರ್ಕಾರೇತರ, ಕಂಪನಿಗಳು, ಟ್ರಸ್ಟ್‌ಗಳು ಹಾಗೂ ಇತರೆ) ಗಳಿಗೆ ತಲಾ ಒಂದು ಲಕ್ಷ ನಗದು ಹಾಗೂ ಪ್ರಶಸ್ತಿ ಪ್ರಮಾಣ ಪತ್ರವನ್ನೊಳಗೊಂಡ **ರಾಜ್ಯ ಪರಿಸರ ಪ್ರಶಸ್ತಿ** ನೀಡಲಾಗುತ್ತದೆ. ಅದೇ ರೀತಿಯಾಗಿ 2013–14ನೇ ಸಾಲಿನ ಕರ್ನಾಟಕ ರಾಜ್ಯದ ಪರಿಸರ ಪ್ರಶಸ್ತಿಗಾಗಿ ಅರ್ಹ ವ್ಯಕ್ತಿ ಹಾಗೂ ಸಂಸ್ಥೆಗಳಿಂದ ಅರ್ಜಿ/ನಾಮನಿರ್ದೇಶನಗಳನ್ನು ಆಹ್ವಾನಿಸಲಾಗಿದೆ. ಈ ಪ್ರಶಸ್ತಿಗಳನ್ನು **ರಾಜ್ಯದ ಮಲೆನಾಡು/ಕರಾವಳಿ ವಲಯ** (ಬೆಳಗಾವಿ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಕೊಡಗು, ಚಾಮರಾಜನಗರ, ಹಾಸನ, ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಮತ್ತು ಉಡುಪಿ ಜಿಲ್ಲೆಗಳು), **ದಕ್ಷಿಣ ವಲಯ** (ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು) ಮತ್ತು **ಉತ್ತರ ವಲಯ** (ದಾವಣಗೆರೆ, ಚಿತ್ರದುರ್ಗ, ಹಾವೇರಿ, ಧಾರವಾಡ, ಗದಗ್, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಬೀದರ್, ಗುಲ್ಬರ್ಗಾ, ರಾಯಚೂರು, ಯಾದಗಿರಿ ಮತ್ತು ಕೊಪ್ಪಳ ಜಿಲ್ಲೆಗಳು) ಎಂದು ಮೂರು ವಲಯಗಳಾಗಿ ವಿಂಗಡಿಸಲಾಗಿದ್ದು, ಈ ವಲಯಗಳಲ್ಲಿನ ತಲಾ ಒಬ್ಬ ವ್ಯಕ್ತಿ ಮತ್ತು ಒಂದು ಸಂಸ್ಥೆಯನ್ನು ಪ್ರಶಸ್ತಿಗೆ ಪರಿಗಣಿಸಲಾಗುವುದು.

ಸರ್ಕಾರದ ಪ್ರಕಟಣೆಯಂತೆ ಸ್ವೀಕೃತವಾಗುವ ಅರ್ಜಿ/ನಾಮನಿರ್ದೇಶನಗಳನ್ನು ನಿಯಮಾನುಸಾರ ಕೂಲಂಕಷವಾಗಿ ಪರಿಶೀಲಿಸಿ ಪರಿಸರ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಮೇಲ್ಕಂಡ ವಲಯಗಳ ಒಬ್ಬ ವ್ಯಕ್ತಿ ಮತ್ತು ಒಂದು ಸಂಸ್ಥೆಯನ್ನು ಗುರುತಿಸಿ, ಪ್ರಶಸ್ತಿಗಾಗಿ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಈ ಕೆಳಕಂಡ ಸದಸ್ಯರನ್ನು ಒಳಗೊಂಡ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿ, (ಪರಿಸರ ಮತ್ತು ಜೀವಿಶಾಸ್ತ್ರ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿ, (ಅರಣ್ಯ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯರು |
| 4. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು ಅರಣ್ಯ ಪಡೆ), ಬೆಂಗಳೂರು | ಸದಸ್ಯರು |
| 5. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | ಸದಸ್ಯರು |
| 6. | ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ | ಸದಸ್ಯರು |
| 7. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | ಸದಸ್ಯರು |
| 8. | ಸದಸ್ಯ ಕಾರ್ಯದರ್ಶಿ, ಕರ್ನಾಟಕ ಜೀವ ವೈವಿಧ್ಯ ಮಂಡಳಿ, ಬೆಂಗಳೂರು | ಸದಸ್ಯರು |
| 9. | ಮಹಾ ನಿರ್ದೇಶಕರು, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ, ಬೆಂಗಳೂರು | ಸದಸ್ಯರು |
| 10. | ಸರ್ಕಾರದ ಅಧೀನ ಕಾರ್ಯದರ್ಶಿ (ಪರಿಸರ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯ–ಕಾರ್ಯದರ್ಶಿ |

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಅಪಜೀ 16 ಇಎನ್‌ಜಿ 2014, ಬೆಂಗಳೂರು, ದಿನಾಂಕ : 09–04–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ವ್ಯಕ್ತಿ/ಸಂಸ್ಥೆಗಳಿಗೆ ಕರ್ನಾಟಕ ಸರ್ಕಾರವು ವಿಶ್ವ ಪರಿಸರ ದಿನಾಚರಣೆಯಂದು ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ವತಿಯಿಂದ ನೀಡಲಾಗುವ 2013–14ನೇ ಸಾಲಿನ **ರಾಜ್ಯ ಪರಿಸರ ಪ್ರಶಸ್ತಿಗಳನ್ನು** ನೀಡುವ ಸಲುವಾಗಿ ಅರ್ಹ ವ್ಯಕ್ತಿ/ಸಂಸ್ಥೆಗಳಿಂದ ಸ್ವೀಕರಿಸಲಾದ ಅರ್ಜಿ/ನಾಮನಿರ್ದೇಶನಗಳನ್ನು ನಿಯಮಾನುಸಾರ ಪರಿಶೀಲಿಸಿ ಪ್ರಶಸ್ತಿಗಾಗಿ ಸರ್ಕಾರಕ್ಕೆ ಸಂಭಾವ್ಯ ಪುರಸ್ಕೃತರ ಹೆಸರನ್ನು ಶಿಫಾರಸ್ಸು ಮಾಡಲು ಈ ಕೆಳಕಂಡ ಸಮಿತಿಯನ್ನು ರಚಿಸಿ ಆದೇಶಿಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿ, (ಪರಿಸರ ಮತ್ತು ಜೀವಿಶಾಸ್ತ್ರ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿ, (ಅರಣ್ಯ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯರು |
| 4. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು ಅರಣ್ಯ ಪಡೆ), ಬೆಂಗಳೂರು | ಸದಸ್ಯರು |
| 5. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು | ಸದಸ್ಯರು |
| 6. | ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ | ಸದಸ್ಯರು |
| 7. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಕೆರೆ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು | ಸದಸ್ಯರು |
| 8. | ಸದಸ್ಯ ಕಾರ್ಯದರ್ಶಿ, ಕರ್ನಾಟಕ ಜೀವ ವೈವಿಧ್ಯ ಮಂಡಳಿ, ಬೆಂಗಳೂರು | ಸದಸ್ಯರು |
| 9. | ಮಹಾ ನಿರ್ದೇಶಕರು, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ, ಬೆಂಗಳೂರು | ಸದಸ್ಯರು |
| 10. | ಸರ್ಕಾರದ ಅಧೀನ ಕಾರ್ಯದರ್ಶಿ (ಪರಿಸರ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯ–ಕಾರ್ಯದರ್ಶಿ |

ಈ ಸಮಿತಿಯು ಪ್ರಸಕ್ತ ಸಾಲಿಗೆ ಮಾತ್ರ ಅನ್ವಯವಾಗಿದ್ದು, ತನ್ನ ಶಿಫಾರಸ್ಸುಗಳನ್ನು ಮೇ–2014ರ ತಿಂಗಳ ಅಂತ್ಯದ ಒಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಹೆಚ್. ಅನಸೂಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವಾಲಯ

## 2013–14ನೇ ಸಾಲಿನ ಕರ್ನಾಟಕ ಸರ್ಕಾರದ ಪರಿಸರ ಪ್ರಶಸ್ತಿಗಾಗಿ ಅರ್ಜಿ/ನಾಮನಿರ್ದೇಶನ ಆಹ್ವಾನ

ಪರಿಸರ ಸಂರಕ್ಷಣೆಗಾಗಿ ಗಣನೀಯ ಸೇವೆ ಸಲ್ಲಿಸಿದ ವ್ಯಕ್ತಿ/ಸಂಸ್ಥೆಗಳನ್ನು ಗುರುತಿಸುವುದಕ್ಕಾಗಿ 2013–14ನೇ ಸಾಲಿನ ರಾಜ್ಯ ಪರಿಸರ ಪ್ರಶಸ್ತಿಗಾಗಿ ಅರ್ಜಿ/ನಾಮನಿರ್ದೇಶನಗಳನ್ನು ಆಹ್ವಾನಿಸಲಾಗಿದೆ. ಈ ಪ್ರಶಸ್ತಿ ತಲಾ ಒಂದು ಲಕ್ಷ ರೂ. ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಈ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳ (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ ಟ್ರಸ್ಟ್‌ಗಳು ಇತರೆ) (i) ಪರಿಸರ ಸಂರಕ್ಷಣೆ ಮತ್ತು (ii) ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿನ ಗಣನೀಯ ಸೇವೆಗಾಗಿ ನೀಡಲಾಗುವುದು.

ಈ ಪ್ರಶಸ್ತಿಗಳನ್ನು ರಾಜ್ಯದ ಮೂರು ವಲಯಗಳಲ್ಲಿ ಎಂದರೆ **ಮಲೆನಾಡು, ಕರಾವಳಿ ವಲಯ** (ಬೆಳಗಾಂ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಕೊಡಗು, ಚಾಮರಾಜನಗರ, ಹಾಸನ, ದಕ್ಷಿಣ ಕನ್ನಡ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಮತ್ತು ಉಡುಪಿ ಜಿಲ್ಲೆಗಳು) **ದಕ್ಷಿಣ ವಲಯ** (ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು) ಮತ್ತು **ಉತ್ತರ ವಲಯ** (ದಾವಣಗೆರೆ, ಚಿತ್ರದುರ್ಗ, ಹಾವೇರಿ, ಧಾರವಾಡ, ಗದಗ್, ಬಳ್ಳಾರಿ, ಬಾಗಲಕೋಟೆ, ಬಿಜಾಪುರ, ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು)ಗಳ ತಲಾ ಒಬ್ಬರು ವ್ಯಕ್ತಿ ಮತ್ತು ಒಂದು ಸಂಸ್ಥೆಗೆ ನೀಡಲಾಗುವುದು.

ಪ್ರಶಸ್ತಿಗೆ ಆಯ್ಕೆ ಮಾಡುವಾಗ ಈ ಕೆಳಗಿನ ಒಂದು ಅಥವಾ ಉಭಯ ಕ್ಷೇತ್ರಗಳಲ್ಲಿ ಸಲ್ಲಿಸಿರುವ ಸೇವೆ/ಆರಂಭಶೀಲತೆ/ಯೋಜನೆ/ಕಾರ್ಯಕ್ರಮಗಳ ಮೂಲಕ ನೀಡಿರುವ ಕೊಡುಗೆಯ ಮೌಲ್ಯ ನಿರ್ಣಯ ಮಾಡಲಾಗುವುದು.

I) **ಪರಿಸರ ಸಂರಕ್ಷಣೆ :–** ಇದರಲ್ಲಿ ಜೈವಿಕ ವೈವಿಧ್ಯತೆ, ಜೈವಿಕ ವ್ಯವಸ್ಥೆ, ವಾಯು, ಜಲ, ಮಣ್ಣು, ನೈಸರ್ಗಿಕ ಸಸ್ಯರಾಶಿ, ವನ್ಯಜೀವಿ ಇತ್ಯಾದಿ ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣೆ ಮತ್ತು ಸಹ್ಯ ವ್ಯವಸ್ಥಾಪನೆ, ಇತ್ಯಾದಿ ಒಳಗೊಂಡಿರುತ್ತದೆ.

II) **ಪರಿಸರ ವ್ಯವಸ್ಥಾಪನೆ :–** ಇದರಲ್ಲಿ ಸದೃಢ ಮತ್ತು ಗುಣಾತ್ಮಕ ಪರಿಸರ ಅಭ್ಯಾಸಗಳು, ಸಂಸ್ಕರಣೆ ಅಥವಾ ಪದಾರ್ಥಗಳ ಬಳಕೆಯಲ್ಲಿ ಪರಿಸರ ಮಾಲಿನ್ಯ ಕಡಿಮೆಗೊಳಿಸುವುದು, ಸಂಪನ್ಮೂಲಗಳ ಸಂರಕ್ಷಣೆ ಮತ್ತು ಸಹ್ಯ ಅಭಿವೃದ್ಧಿಯ ಧ್ಯೇಯ ಹೊಂದಿರುವುದು. ಇತ್ಯಾದಿ ಒಳಗೊಂಡಿರುತ್ತದೆ.

**ಯಾರು ಅರ್ಜಿ ಸಲ್ಲಿಸಬಹುದು :**

1. ಪರಿಸರ ಸಂರಕ್ಷಣೆ ಮತ್ತು ಪರಿಸರ ವ್ಯವಸ್ಥಾಪನೆ ಯಾವುದಾದರೂ ಒಂದು ಕ್ಷೇತ್ರ ಅಥವಾ ಎರಡರಲ್ಲೂ ಕರ್ನಾಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳು (ಕರ್ನಾಟಕದಲ್ಲಿ ವಾಸವಾಗಿರುವವರು) ಮತ್ತು ಸಂಸ್ಥೆಗಳಿಗೆ ಈ ಪ್ರಶಸ್ತಿ ಮುಕ್ತವಾಗಿದೆ.
2. ಸರ್ಕಾರೇತರ ಸಂಸ್ಥೆಗಳಾಗಿದ್ದಲ್ಲಿ 10–05–2014ಕ್ಕೆ ನೋಂದಾಯಿತವಾಗಿ ಕನಿಷ್ಠ 3 ವರ್ಷಗಳಾಗಿರಬೇಕು.
3. ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಸಂಬಂಧಿಸಿದ ಸಂಸ್ಥೆಗಳ ನೌಕರರು ಈ ಪ್ರಶಸ್ತಿಗೆ ಅರ್ಹರಾಗಿರುವುದಿಲ್ಲ.
4. ವ್ಯಕ್ತಿಗಳು ಅಧಿಕಾರ ಸಾಮರ್ಥ್ಯದಲ್ಲಿ ನಿರ್ವಹಿಸಲಾದ ಕಾರ್ಯಗಳು/ಆರಂಭಶೀಲತೆಗಳು/ಯೋಜನೆಗಳು/ಕಾರ್ಯಕ್ರಮಗಳನ್ನು ಈ ಪ್ರಶಸ್ತಿಗೆ ಪರಿಗಣಿಸಲಾಗುವುದಿಲ್ಲ.
5. ಈ ಹಿಂದೆ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಿಂದ ಪ್ರಶಸ್ತಿ ಪುರಸ್ಕೃತರಾದ ವ್ಯಕ್ತಿ/ಸಂಸ್ಥೆಗಳನ್ನು ಪರಿಗಣಿಸಲಾಗುವುದಿಲ್ಲ.

**ಪ್ರಶಸ್ತಿಗಾಗಿ ಪರಿಗಣಿಸುವ ಕಾರ್ಯಗಳ ಅವಧಿ :–**

1. ಈ ಪ್ರಶಸ್ತಿಗಾಗಿ ಪರಗಣಿಸಲಾಗುವ ವ್ಯಕ್ತಿ/ಸಂಸ್ಥೆಯ ಆರಂಭಶೀಲತೆ/ಕಾರ್ಯಕ್ರಮಗಳು/ಯೋಜನೆಗಳು/ಕೊಡುಗೆಗಳು 10–05–2014ಕ್ಕೆ 5 ವರ್ಷಗಳ ಒಳಗಿರಬೇಕು.
2. ಯಾವುದೇ ವ್ಯಕ್ತಿ/ಸಂಸ್ಥೆಗಳು ಪರಿಸರ ಕ್ಷೇತ್ರದಲ್ಲಿ ನಿರ್ವಹಿಸಿರುವ ಗಣನೀಯ ಸೇವೆಯನ್ನು ಪರಿಗಣಿಸಿ ಪ್ರಶಸ್ತಿಗೆ ತಾನೇ ಅಥವಾ ಪ್ರಶಸ್ತಿ ಸಮಿತಿಯ ಸಮಾಲೋಚನೆಯೊಂದಿಗೆ ನಾಮಕರಣ ಮಾಡುವ ಅಧಿಕಾರವನ್ನು ಸರ್ಕಾರ ಕಾಯ್ದಿರಿಸಿದೆ.

**ಅರ್ಜಿ ಸಲ್ಲಿಸಬೇಕಾದ ರೀತಿ :**

ಈ ಕೆಳಗಿನ ವಿವರಗಳನ್ನು ಒಳಗೊಂಡಿರುವ ಅರ್ಜಿಯನ್ನು ಮುಚ್ಚಿದ ಲಕೋಟೆಯಲ್ಲಿ ಮಾತ್ರವೇ ಸಲ್ಲಿಸಬೇಕು.

1. ವ್ಯಕ್ತಿ/ಸಂಸ್ಥೆಯ ಹೆಸರು
2. ವ್ಯವಹರಿಸಬೇಕಾದ ವಿಳಾಸ

3. ನಿರ್ವಹಿಸಲಾದ ಕಾರ್ಯ/ಆರಂಭಶೀಲತೆ/ಯೋಜನೆ/ಕಾರ್ಯಕ್ರಮಗಳ ಕುರಿತಾಗಿ ವಿವರಗಳನ್ನು ವರ್ಷವಾರು ಮತ್ತು ಕ್ಷೇತ್ರವಾರು ಪೂರಕ ದಾಖಲೆಗಳೊಡನೆ ನೀಡುವುದು.
4. ವ್ಯಕ್ತಿ/ಸಂಸ್ಥೆಗಳು ಪರಿಸರ ಸಂರಕ್ಷಣೆಗಾಗಿ ನಿರ್ವಹಿಸಲಾಗಿರುವ ಕಾರ್ಯದ ಅವಧಿ (ವರ್ಷಗಳಲ್ಲಿ) ಮತ್ತು ಸಾಧನೆ.
5. ಪ್ರಶಸ್ತಿಗೆ ಸೂಚಿಸಲಾಗಿರುವ ಕಾರ್ಯ/ಆರಂಭಶೀಲತೆ/ಯೋಜನೆ ಕಾರ್ಯಕ್ರಮಗಳ ನಿರ್ವಹಣೆಗಾಗಿ ವಿನಿಯೋಗಿಸಲಾಗಿರುವ ಹಣ ಮತ್ತು ಆರ್ಥಿಕ ಸಹಾಯದ ಮೂಲಗಳು (ಪಡೆದಿದ್ದಲ್ಲಿ).
6. ಈವರೆಗೆ ಪಡೆದಿರುವ ಪ್ರಶಸ್ತಿಗಳ ವಿವರಗಳು (ಪಡೆದಿದ್ದಲ್ಲಿ)
7. ಪ್ರತಿಪಾದನೆ ಕುರಿತಾಗಿ ಸಾಕ್ಷ್ಯಾಧಾರಗಳು

ಅರ್ಜಿದಾರರನ್ನು ಪ್ರಶಸ್ತಿ ಸಮಿತಿಯ ಮುಂದೆ ವೈಯುಕ್ತಿಕವಾಗಿ ಹಾಜರಾಗಲು ಆಹ್ವಾನಿಸಲಾಗುವುದಿಲ್ಲ. ಆದುದರಿಂದ, ಅರ್ಜಿಯೊಂದಿಗಿರುವ ಮಾಹಿತಿಗಳು ಸಮರ್ಪಕ ರೀತಿಯಲ್ಲಿ ದಾಖಲಾತಿ ಮತ್ತು ಸೂಚಿತವಾಗಿರಬೇಕು. ಮುಖ್ಯವಾದ ಮೌಲೀಕರಣ ಮಾನದಂಡಗಳನ್ನು ಅರ್ಜಿಯಲ್ಲಿ ವಿವರವಾಗಿ ಪ್ರತಿನಿಧಿಸಿರಬೇಕು. ಅಪೂರ್ಣವಾದ ಹಾಗೂ ಕಾರ್ಯನಿರ್ವಹಿಸಿರುವುದರ ಬಗ್ಗೆ ಆಧಾರವಾಗಿರುವ ದಾಖಲೆ/ಸಾಕ್ಷ್ಯಾಧಾರ/ರುಜುವಾತುಗಳು ಇಲ್ಲದೇ ಸಲ್ಲಿಸಲಾದ ಅರ್ಜಿಗಳನ್ನು ಪ್ರಶಸ್ತಿ ಸಮಿತಿಯ ಮುಂದೆ ಮಂಡಿಸಲಾಗುವುದಿಲ್ಲ. ಪ್ರಶಸ್ತಿ ಸಮಿತಿಯು ಅಗತ್ಯವಿದ್ದಲ್ಲಿ ಅರ್ಜಿದಾರರು/ನಾಮನಿರ್ದೇಶನ ಮಾಡುವವರು ಪ್ರತಿಪಾದಿಸುವ ಕಾರ್ಯಗಳ ಕುರಿತಾಗಿ ಕ್ಷೇತ್ರ ಸಮೀಕ್ಷೆ ನಡೆಸುವ ಅಧಿಕಾರವನ್ನು ಹೊಂದಿರುತ್ತದೆ. ಆಧಾರರಹಿತ ಪ್ರತಿಪಾದನೆ ಮಾಡುವ ಹಾಗೂ ಪ್ರಭಾವ ಬೀರುವ ಅರ್ಜಿದಾರರನ್ನು ಈ ಪ್ರಶಸ್ತಿಗೆ ಹಾಗೂ ಇನ್ನು ಮುಂದಿನ ಯಾವುದೇ ರಾಜ್ಯ ಪ್ರಶಸ್ತಿಗೆ ಅನರ್ಹಗೊಳಿಸಲಾಗುವುದು.

**ಅರ್ಜಿಗಳನ್ನು ಸಲ್ಲಿಸುವುದು :**

ಸರ್ಕಾರದ ಕಾರ್ಯದರ್ಶಿಗಳು,
ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ
(ಜೀವಿಶಾಸ್ತ್ರ ಮತ್ತು ಪರಿಸರ),
ಕೊಠಡಿ ಸಂಖ್ಯೆ : 708, 7ನೇ ಮಹಡಿ,
ಬಹುಮಹಡಿಗಳ ಕಟ್ಟಡ,
4ನೇ ಹಂತ, ಬೆಂಗಳೂರು-560001 ಇವರಿಗೆ ಕಳುಹಿಸಬಹುದಾಗಿದೆ.

**ಕೊನೆಯ ದಿನಾಂಕ :**

ಸಂಪೂರ್ಣವಾಗಿ ಭರ್ತಿಮಾಡಿದ ಅರ್ಜಿಗಳನ್ನು ದಿನಾಂಕ : 10-05-2014ರಂದು ಸಾಯಂಕಾಲ 5-00 ಗಂಟೆಯೊಳಗಾಗಿ ಮಾತ್ರ ಸ್ವೀಕರಿಸಲಾಗುವುದು.

ಹೆಚ್ಚಿನ ವಿವರಗಳಿಗೆ ದಯವಿಟ್ಟು ನೋಡಿ/ಸಂಪರ್ಕಿಸಿ :-

1. ಎಲ್ಲಾ ಜಿಲ್ಲಾಧಿಕಾರಿಗಳ ಕಛೇರಿ.
2. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಎಲ್ಲಾ ಪ್ರಾದೇಶಿಕ ಕಛೇರಿಗಳು.
3. ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಎಲ್ಲಾ ಪ್ರಾದೇಶಿಕ ಕಛೇರಿಗಳು
4. ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸಚಿವಾಲಯದ ವೆಬ್‌ಸೈಟ್ www.parisara.kar.nic.in
5. ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ವೆಬ್‌ಸೈಟ್ : www.kspcb.kar.nic.in
6. ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ ವೆಬ್‌ಸೈಟ್ : www.empri.kar.nic.in
7. ಕರ್ನಾಟಕ ಜೀವ ವೈವಿದ್ಯ ಮಂಡಳಿಯ : www.kbb.kar.nic.in
8. ಕೆರೆ ಅಭಿವೃದ್ಧಿ ಪ್ರಾಧಿಕಾರದ ವೆಬ್‌ಸೈಟ್ : www.karunadu.gov.ni/lda

**ಜಿ.ಹೆಚ್. ಅನಸೂಯಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

PR. 374
SC-50

## ENERGY SECRETARIAT

Sub : Implementation of "Belaku Yojana" Scheme by Karnataka Renewable Energy Development Limited in the State -further clarification reg.

Read :
1. Government Order No EN20PSR2012 dated 30.01.2013.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರ ಪತ್ರ ಸಂಖ್ಯೆ : ಕೆ.ಆರ್.ಇ.ಡಿ/07/ಬೆಳಕು ಯೋಜನೆ ಅನುಷ್ಠಾನ/2013-14/2834, ದಿನಾಂಕ : 20-12-2013.
3. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ಪತ್ರ ಸಂಖ್ಯೆ : ಗ್ರಾಅಪ/01/ಜೈಅಯೋ/2014, ದಿನಾಂಕ : 20-01-2014.

**Preamble:**

In the Government Order read at (1) above Implementation of "Belaku Yojana" Scheme by Karnataka Renewable Energy Development Limited (KREDL) in the State, it was proposed to supply 2 CFL lamps replacing 2 incandescent bulbs for each to Below Poverty Line, Scheduled Castes and Scheduled Tribes beneficiary through Food and Civil Supplies and Consumer Affairs Department (through PDS/Fair Price Shops) covering approximately 10.5 lakhs beneficiaries.

The KREDL had floated tender in 2013 and due to technical reasons the tender was cancelled and a revised proposal to implement the scheme through Rural Development and Panchayat Raj department (RDPR) was received vide letter read at(2) from KREDL. The same was sent to RDPR department for opinion. RDPR has opined that the "Belaku Yojana" is not in the preview of the RDPR department and asked Energy Department to implement the scheme through KREDL taking assistance of ESCOMs vide letter read at (3).

In view of the above, MD KREDL in his letter no KREDL/BY- 2013-14 dated 22.02.2014 has sent revised proposal stating that KREDL will purchase the CFL and supply to Electricity Supply Companies (ESCOMs) and jurisdictional ESCOMs will distribute the CFL lamps to the beneficiaries using their field officers in their jurisdiction.

Accordingly the following order is issued:

**Government Order No: EN 46 VSC 2012, Bangalore Dated: 05.04.2014**.

Under the circumstances explained in the preamble, the Karnataka Renewable 'Energy Development Limited (KREDL) will procure CFL lamps duly following the procedure (KTPP act) and supply it to Electricity Supply companies (ESCOMs) for distribution. The role of Food and Civil Supplies and Consumer Affairs Department in the order read at (1) will be replaced by jurisdictional Electricity Supply Companies (ESCOMs) for distribution.

All other terms and conditions in the said order read at (1) remain the same.

BY ORDER AND IN THE NAME OF GOVERNOR OF KARNATAKA

**K.L. RAMACHANDRA**

DEPUTY SECRETARY TO GOVERNMENT,

ENERGY DEPARTMENT.

**P.R. 377**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** (1) ಗ್ರಾಮ ಪಂಚಾಯಿತಿಗಳಲ್ಲಿ ಸಾಮಾನ್ಯ ಸೇವಾ ಕೇಂದ್ರ (ಸಿಎಸ್‌ಸಿ)ಗಳನ್ನು ಸ್ಥಾಪಿಸುವ ಕೇಂದ್ರ ಸರ್ಕಾರದ ಯೋಜನೆಯನ್ನು ಮತ್ತು ಅದರ (2) ರಾಜ್ಯ ಮಿಷನ್ ಮೋಡ್ ಯೋಜನೆ (ಎಮ್‌ಎಮ್‌ಪಿ)ಯಾದ ಇ–ಜಿಲ್ಲಾ ಯೋಜನೆಗಳಿಗೆ ಸಂಬಂಧಿಸಿದಂತೆ ಅಧಿಕಾರಯುತ ಸಮಿತಿಯೊಂದನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ:02.01.2014ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 1 ಯೋಜನೆ 2014(ಭಾಗ–4)

2. ನಿರ್ದೇಶಕರು, ಇ.ಡಿ.ಸಿ.ಎಸ್ ನಿರ್ದೇಶನಾಲಯರವರ ದಿನಾಂಕ:04.12.2013ರ ಪತ್ರ ಸಂಖ್ಯೆ: ಇಡಿಸಿಎಸ್:04ಸಿಎಸ್‌ಸಿ: 2013

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ದಿನಾಂಕ: 02.01.2014ರ ಸರ್ಕಾರಿ ಆದೇಶದನ್ವಯ (1) ಗ್ರಾಮ ಪಂಚಾಯಿತಿಗಳಲ್ಲಿ ಸಾಮಾನ್ಯ ಸೇವಾ ಕೇಂದ್ರ (ಸಿಎಸ್‌ಸಿ)ಗಳನ್ನು ಸ್ಥಾಪಿಸುವ ಕೇಂದ್ರ ಸರ್ಕಾರದ ಯೋಜನೆಯನ್ನು ಮತ್ತು ಅದರ (2) ರಾಜ್ಯ ಮಿಷನ್ ಮೋಡ್ ಯೋಜನೆ (ಎಮ್‌ಎಮ್‌ಪಿ)ಯಾದ ಇ–ಜಿಲ್ಲಾ ಯೋಜನೆ, ಈ ಯೋಜನೆಗಳನ್ನು ರಾಜ್ಯದಲ್ಲಿ ಜಾರಿಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಸದರಿ ಆದೇಶದ ಕಂಡಿಕೆ–4.4ನ್ನು ಅದರ ಕಂಡಿಕೆ–4.8ದೊಂದಿಗೆ ಓದಿಕೊಂಡಂತೆ, ಇವುಗಳನ್ವಯ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಅಧಿಕಾರಯುತ ಸಮಿತಿಯನ್ನು ರಚಿಸಲು ಆದೇಶಿಸಲಾಗಿದೆ ಹಾಗೂ ಅದರ ಕಾರ್ಯವ್ಯಾಪ್ತಿಯನ್ನು ನಿಗದಿಪಡಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ:04.12.2013ರ ಪತ್ರದನ್ವಯ ನಿರ್ದೇಶಕರು, ವಿದ್ಯುನ್ಮಾನ ನಾಗರೀಕ ಸೇವಾ ವಿತರಣಾ (ಇ.ಡಿ.ಸಿ.ಎಸ್) ನಿರ್ದೇಶನಾಲಯರವರು ಸದರಿ ಸಮಿತಿಯ ರಚನೆಯನ್ನು (composition) ಪ್ರಸ್ತಾಪಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 01 ಯೋಜನೆ 2013 (ಭಾ–4) ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ 2014**.

2. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಮೇಲೆ (1)ರಲ್ಲಿ ಓದಲಾದ ದಿನಾಂಕ: 02.01.2014ರ ಆದೇಶದ ಕಂಡಿಕೆ 4.4ರನ್ವಯ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಅಧಿಕಾರಯುತ ಸಮಿತಿಯನ್ನು ರಚಿಸಲು ಆದೇಶಿಸಿದ್ದು, ಅದರ ರಚನೆಯನ್ನು (composition) ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ:

**ಅಧ್ಯಕ್ಷರು**

ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ.

**ಸದಸ್ಯರುಗಳು**

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ.

2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ.
4. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ.
5. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.
6. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ).
7. ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ).
8. ಡೆಪ್ಯೂಟಿ ಡೈರೆಕ್ಟರ್ ಜನರಲ್ ಮತ್ತು ರಾಜ್ಯ ಇನ್ಫರ್‌ಮ್ಯಾಟಿಕ್ಸ್ ಅಧಿಕಾರಿ, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್.ಐ.ಸಿ), ಬೆಂಗಳೂರು.
9. ಅಧ್ಯಕ್ಷರು ನಾಮ ನಿರ್ದೇಶಿಸಬಹುದಾದ ಇಬ್ಬರು ತಜ್ಞರುಗಳವರು.

**ಸದಸ್ಯ–ಸಮಾವೇಶಕರು (Member-Convenor)**

10. ನಿರ್ದೇಶಕರು, ವಿದ್ಯುನ್ಮಾನ ನಾಗರೀಕ ಸೇವಾ ವಿತರಣಾ (ಇಡಿಸಿಎಸ್) ನಿರ್ದೇಶನಾಲಯ.

3. ಸದರಿ ಸಮಿತಿಯ ಕಾರ್ಯವ್ಯಾಪ್ತಿಯನ್ನು ಮೇಲೆ (1)ರಲ್ಲಿ ದಿನಾಂಕ: 02.01.2014ರ ಸರ್ಕಾರಿ ಆದೇಶದ ಕಂಡಿಕೆ 4.4 ಮತ್ತು 4.8 ಗಳನ್ವಯ ನಿಗದಿಪಡಿಸಿದ್ದು, ಅದನ್ನು ಈ ಕೆಳಗೆ ಪುನರುಚ್ಚರಿಸಿದೆ:–

(1) ನಾಗರೀಕರಿಗೆ ಸೇವೆಗಳನ್ನು ನೀಡುವ ಪ್ರಸ್ತುತ ಯೋಜನೆಗಳಾದ ಜನಸ್ನೇಹಿ ಕೇಂದ್ರ, ಬೆಂಗಳೂರು–ಒನ್ ಮತ್ತು ಕರ್ನಾಟಕ–ಒನ್ ಯೋಜನೆಗಳನ್ನು ಸಿಎಸ್‌ಸಿಗಳನ್ನು ಸ್ಥಾಪಿಸುವ ಯೋಜನೆಯೊಂದಿಗೆ ಸಮೀಕರಿಸುವ ವಿಷಯವನ್ನು ಒಳಗೊಂಡಂತೆ, ಅದರ ವಿವರಗಳನ್ನು ಮತ್ತು ವಿಧಿ ವಿಧಾನಗಳ ಕುರಿತಂತೆ ನಿರ್ಣಯಿಸುವುದು {To take decisions with regard to the details and modalities of implementing the scheme of establishing CSCs in gram panchayats including integration of existing citizen service centers viz Janasnehi kendras, Bangalore-One and Karnataka-One centers with CSCs}

(2) ವಿವಿಧ ಸರ್ಕಾರಿ ಸೇವೆಗಳನ್ನು ಇ–ಜಿಲ್ಲಾ ಯೋಜನೆಯ ಮೂಲಕ ನೀಡಲು ಅನುವಾಗಲು ವಿವಿಧ ಇಲಾಖೆಗಳೊಂದಿಗೆ ಸಮನ್ವಯಿಸವುದು {To take decisions with regard to details and modalities of implementing e-District Mission Mode Project including integration of existing e-services of various departments with e-District project.}

(3) ವಿವಿಧ ಸರ್ಕಾರಿ ಸೇವೆಗಳನ್ನು ಇ–ಜಿಲ್ಲಾ ಯೋಜನೆಯ ಮತ್ತು ಸಿಎಸ್‌ಸಿಗಳ ಮೂಲಕ ನೀಡಲು ಅನುವಾಗಲು ವಿವಿಧ ಇಲಾಖೆಗಳೊಂದಿಗೆ ಸಮನ್ವಯಿಸುವುದು. {To coordinate with various departments for enabling their services through e-District and CSCs}

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವೈ.ಸುಶೀಲ**

ಪೀಠಾಧಿಕಾರಿ–2

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

**P.R. 401**
**SC - 200**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 28 ಹೆಚ್‌ಎಂಬಿ 2014 ಬೆಂಗಳೂರು, ದಿನಾಂಕ: 05–04–2014**

**ವಿಷಯ:** ಕುಮಾರಿ ನಂದಿನಿ ಕೆ.ಆರ್. ಸಹಾಯಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಇವರನ್ನು ಕರ್ನಾಟಕ ಭವನದಲ್ಲಿ ಖಾಲಿಯಿರುವ ಸಹಾಯಕ ಇಂಜಿನಿಯರ್ ಹುದ್ದೆಗೆ ಮರುನಿಯೋಜನೆ ಮೇಲೆ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಲೋಕೋಪಯೋಗಿ ಇಲಾಖೆ ಇವರ ಜ್ಞಾಪನ ಪತ್ರ ಸಂಖ್ಯೆ: ಸಿಬಿಎಸ್:108: ಸಇಂ–ನೇಮಕಾತಿ:ಇಎಸ್‌ಸಿ–1/2013–14, ದಿನಾಂಕ:18–01–2014.

2) ಜಂಟಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಪತ್ರ ಸಂಖ್ಯೆ:ಕೆಬಿ/ಕೆಇಇ/2014–15, ದಿನಾಂಕ:19–03–2014.

ಕುಮಾರಿ ಕೆ.ಆರ್. ನಂದಿನಿ, ಸಹಾಯಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಇವರನ್ನು ಉಲ್ಲೇಖಿಸಲಾದ ಲೋಕೋಪಯೋಗಿ ಇಲಾಖೆಯ ಜ್ಞಾಪನ ಪತ್ರದ ದಿನಾಂಕ:18–01–2014 ಕ್ರಮ ಸಂಖ್ಯೆ: 07ರಲ್ಲಿ ಕರ್ನಾಟಕ ಭವನ ಉಪ ವಿಭಾಗ, ನವದೆಹಲಿ ಇಲ್ಲಿ ಖಾಲಿಯಿರುವ ಸಹಾಯಕ ಇಂಜಿನಿಯರ್ ಹುದ್ದೆಗೆ ನೇಮಕಾತಿ ಮಾಡಿ ಆದೇಶ ಹೊರಡಿಸಲಾಗಿರುತ್ತದೆ. ಸದರಿ ಆದೇಶದಂತೆ ಕುಮಾರಿ. ಕೆ.ಆರ್.ನಂದಿನಿ ಇವರು ದಿನಾಂಕ:22–01–2014 ರಂದು ಹಾಲಿ ಖಾಲಿಯಿರುವ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಉಲ್ಲೇಖಿಸಲಾದ (2)ರ ಪತ್ರದಲ್ಲಿ ಜಂಟಿ ನಿವಾಸಿ ಆಯುಕ್ತರು ಕುಮಾರಿ ಕೆ.ಆರ್. ನಂದಿನಿಯವರು ಉಲ್ಲೇಖ (1)ರ ಆದೇಶದನ್ವಯ ಹಾಲಿ ಖಾಲಿಯಿರುವ ಸಹಾಯಕ ಇಂಜಿನಿಯರ್ ಹುದ್ದೆಗೆ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ವರದಿ ಮಾಡಿರುತ್ತಾರೆ. ಸದರಿಯವರು ಸಿಆಸುಇ

(ರಾಜ್ಯ ಶಿಷ್ಟಾಚಾರ) ವಿಭಾಗದ ಮುಖಾಂತರ ಮರುನಿಯೋಜನೆಯ ಮೇಲೆ ನಿಯಮಾನುಸಾರ ಕರ್ತವ್ಯಕ್ಕೆ ಹಾಜರಾಗಬೇಕಾಗಿರುತ್ತದೆ. ಕುಮಾರಿ ಕೆ.ಆರ್. ನಂದಿನಿ ಇವರನ್ನು ಕರ್ನಾಟಕ ಭವನಕ್ಕೆ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ದಿನಾಂಕ:22–01–2014ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರುನಿಯೋಜಿಸಿ ಆದೇಶಿಸಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮುನಿರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**P.R. 402**
**SC - 25**

## FINANCE SECRETARIAT

**SUB : Revision of the rates of Dearness Allowance-reg.**

**READ :**
1. G.O. No. FD 23 SRP 2011, dated: 15.06.2011
2. G.O. No. FD 07 SRP 2012, dated: 21.04.2012
3. G.O. No. FD 17 SRP 2012, dated: 14.05.2012
4. G.O. No. FD 25 SRP 2012, dated: 17.10.2012
5. G.O. No. FD 09 SRP 2013, dated: 08.05.2013
6. G.O. No. FD 21 SRP 2013, dated: 03.10.2013
7. Letter No. GEA/1290/2013-14 dated: 28-03-2014 received from the President, Karnataka State Government Employees' Association.

## GOVERNMENT ORDER NO. FD 5 SRP 2014, BANGALORE, DATED 8th April 2014

Government are pleased to sanction increase in the rates of Dearness Allowance payable to the State Government employees in the Revised Pay Scales 2012 from the existing 15% to 21% of Basic Pay with effect from **1st January 2014.**

2. These orders will apply to the full time Government employees. employees of Zilla Panchayats, work charged employees on regular time scales of pay, full time employees of aided educational Institutions and Universities who are on regular time scales of pay.

3. For the purpose of grant of Dearness Allowance, the term 'Basic Pay' means. pay drawn by a Government Employee in the scale of pay applicable to the post held by him and includes:

a. Stagnation increment, if any, granted to him above the maximum of the scale of pay.

b. Personal Pay. if any. granted to him under sub-rule (3) of Rule 7 of the Karnataka Civil Services (Revised Pay) Rules 2012.

c. Additional increment, if any, granted to him above the maximum of the scale of pay.

4. Basic Pay shall not include any emoluments other than those specified above.

5. Government are also pleased to sanction increase in the rates of Dearness Allowance from the existing **15% to 21%** of the basic pension/family pension with effect from **1st January 2014** to the State Government pensioners/family pensioners and pensioners/family pensioners of the aided educational institutions whose pension/family pension is paid out of the Consolidated Fund of the State.

6. Government are also pleased to sanction increase in the rates of Dearness Allowance from the existing **15% to 21%** of the basic pension/family pension with effect from **1st January 2014** to the pensioners/family pensioners who were drawing pay in the UGC/AICTE/ICAR scales of pay.

7. Separate orders will be issued in respect of employees on UGC/AICTE/ICAR/NJPC scales of pay and also in respect of NJPC pensioners.

8. The increase in Dearness Allowance admissible under this order' is payable in cash.

9. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

10. The Dearness Allowance will be shown as a distinct element of remuneration and will not be treated as pay for any purpose.

By Order and in the Name of the Governor of Karnataka,

**SUNDARA RAJ GUPTHA**

Joint Secretary to Government

Finance Department (Services-2)

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಆರ್ಥಿಕ ಸಚಿವಾಲಯ**

**ವಿಷಯ :** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ :**
1. ಸ.ಅ. ಸಂಖ್ಯೆ : ಎಫ್‌ಡಿ 23 ಎಸ್‌ಆರ್‌ಪಿ 2011, ದಿನಾಂಕ : 15–06–2011.
2. ಸ.ಅ. ಸಂಖ್ಯೆ : ಎಫ್‌ಡಿ 07 ಎಸ್‌ಆರ್‌ಪಿ 2012, ದಿನಾಂಕ : 21–04–2012.
3. ಸ.ಅ. ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 2012, ದಿನಾಂಕ : 14–05–2012.
4. ಸ.ಅ. ಸಂಖ್ಯೆ : ಎಫ್‌ಡಿ 25 ಎಸ್‌ಆರ್‌ಪಿ 2012, ದಿನಾಂಕ : 17–10–2012.
5. ಸ.ಅ. ಸಂಖ್ಯೆ : ಎಫ್‌ಡಿ 09 ಎಸ್‌ಆರ್‌ಪಿ 2013, ದಿನಾಂಕ : 08–05–2013.
6. ಸ.ಅ. ಸಂಖ್ಯೆ : ಎಫ್‌ಡಿ 21 ಎಸ್‌ಆರ್‌ಪಿ 2013, ದಿನಾಂಕ : 03–10–2013.
7. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಇವರ ಪತ್ರ ಸಂಖ್ಯೆ : ಜಿಇಎ/1290/2013–14, ದಿನಾಂಕ : 28–03–2014.

**ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 5 ಎಸ್‌ಆರ್‌ಪಿ 2014, ಬೆಂಗಳೂರು, ದಿನಾಂಕ : 8ನೇ ಏಪ್ರಿಲ್ 2014.**

ರಾಜ್ಯ ಸರ್ಕಾರಿ ನೌಕರರುಗಳಿಗೆ 2012ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ 1ನೇ ಜನವರಿ 2014 ರಿಂದ ಜಾರಿಗೆ ಬರುವಂತೆ ತುಟ್ಟಿ ಭತ್ಯೆಯ ದರವನ್ನು ಮೂಲ ವೇತನದ ಶೇಕಡ 15 ರಿಂದ ಶೇಕಡ 21ಕ್ಕೆ ಹೆಚ್ಚಿಸಿ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ.

3. ತುಟ್ಟಿಭತ್ಯೆಯ ಉದ್ದೇಶಕ್ಕಾಗಿ "ಮೂಲ ವೇತನ" ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುತ್ತಿರುವ ವೇತನ ಮತ್ತು ಅದರಲ್ಲಿ,

(ಅ) ವೇತನ ಶ್ರೇಣಿಯ ಗರಿಷ್ಟಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ. ಆ ಸ್ಥಗಿತ ವೇತನ ಬಡ್ತಿ.

(ಆ) 2012ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ,

(ಇ) ವೇತನ ಶ್ರೇಣಿಯ ಗರಿಷ್ಟಕ್ಕಿಂತ ಹೆಚ್ಚಾಗಿ ಅವನಿಗೆ ಮಂಜೂರು ಮಾಡಲಾಗಿರುವ ಹೆಚ್ಚುವರಿ ವೇತನ ಬಡ್ತಿ ಯಾವುದಾದರೂ ಇದ್ದಲ್ಲಿ, ಅವುಗಳು ಸೇರುತ್ತವೆ.

4. ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

5. ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 15 ರಿಂದ ಶೇಕಡ 21 ಕ್ಕೆ ಹೆಚ್ಚಿಸಿ ದಿನಾಂಕ 1ನೇ ಜನವರಿ 2014 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

6. ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿದ್ದ ಪಿಂಚಣಿದಾರರು/ಕುಟುಂಬ ಪಿಂಚಣಿದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 15 ರಿಂದ ಶೇಕಡ 21ಕ್ಕೆ ಹೆಚ್ಚಿಸಿ ದಿನಾಂಕ : 1ನೇ ಜನವರಿ 2014 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

7. ಯುಜಿಸಿ/ಎಐಸಿಟಿಇ/ಐಸಿಎಆರ್/ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ನೌಕರರಿಗೆ ಮತ್ತು ಎನ್‌ಜೆಪಿಸಿ ಪಿಂಚಣಿದಾರರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಆದೇಶಗಳನ್ನು ಹೊರಡಿಸಲಾಗುವುದು.

8. ಈ ಆದೇಶದ ಮೇರೆಗೆ ಲಭ್ಯವಿರುವ ತುಟ್ಟಿಭತ್ಯೆಯನ್ನು ನಗದಾಗಿ ಪಾವತಿ ಮಾಡಲಾಗುವುದು.

9. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

10. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2).

**PR. 389**
**SC-500**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59